ರಂಗನಾಥನ ಗುಡಿಗೆ ಹೋಗೋಣ ಬಾ" ಎಂದು ಅಭಯ. ಇಬ್ಬರೂ ಮದುವೆಯಾಗಲು ಒಪ್ಪಿದ್ದಾರೆ. ಗುಡಿಯಲ್ಲಿ ದೇವರ ಮುಂದೆ ವಚನ ತೆಗೆದುಕೊಳ್ಳಲು ಬಂದಿದ್ದಾರೆ. ಯಾವ ಗುಡಿಗೆ ಹೋಗಬೇಕೆಂಬುದು ತೀರ್ಮಾನವಾಗದೆ ಅಲ್ಲಿಯೇ ನಿಂತು ಕಚ್ಚಾಡುತ್ತಿದ್ದಾರೆ. ಸ್ವಲ್ಪ ಹೊತ್ತು ಕಚ್ಚಾಡಿದರು. ಅನಂತರ "ಅಯ್ಯೋ ಮಂಕೆ ಆ ಗುಡಿಗಳಲ್ಲೇನಿದೆ; ನಮ್ಮ ಗುಡಿಯಿರುವುದು ಪೂರ್ಣಯ್ಯನ ಬೀದಿಯಲ್ಲಿ ಅಲ್ಲಿಗೆ ಹೋಗೋಣ ನಡಿ" ಎಂದ ಅಭಯ.

ರತ್ನಮಾಲೆ ಅಭಯ ಕುಮಾರರಿಬ್ಬರೂ ಅನಂತ ಉಪಾಧ್ಯಾಯರ ಮನೆಗೆ ಬಂದರು. ಅಲ್ಲಿ ರುಕ್ಮಿಣಮ್ಮನವರು ಬೀಸಣಿಗೆಯಿಂದ ಅನಂತಯ್ಯನವರಿಗೆ ಗಾಳಿಬೀಸುತ್ತಿದ್ದರು. "ರುಕ್ಕು ಆ ಕೆಂಪು ರಟ್ಟಿನ ಪುಸ್ತಕ ತೆಗೆದುಕೋ" ಎಂದು ಆದಿಕವಿಯ ಆದಿಪುರಾಣ ತೆಗೆಸಿಕೊಂಡು ಮೋಕ್ಷ ಕಲ್ಯಾಣ ಓದುವಂತೆ ಹೇಳಿದರು. ರುಕ್ಮಿಣಮ್ಮನವರ ಕಣ್ಣಿನಲ್ಲಿ ನೀರು ತುಂಬಿತು. ಅಕ್ಷರಗಳೇ ಕಾಣಲಿಲ್ಲ. ಅವರ ಕಷ್ಟ ನೋಡಿ ಪುಸ್ತಕವೂ ಅಳುತ್ತಿದೆಯೋನ್ನುವಂತೆ ರುಕ್ಮಿಣಮ್ಮನವರ ಕಣ್ಣೀರು ಪುಸ್ತಕದ ಮೇಲೆ ಹರಿದುಹೋಗುತ್ತಿತ್ತು.

ಅಭಯಕುಮಾರ ರತ್ನಮಾಲೆಯಿಬ್ಬರು ಉಪಾಧ್ಯಾಯರ ಅಕ್ಕಪಕ್ಕದಲ್ಲಿ ನಿಂತರು. ಇಬ್ಬರ ಕೈಗಳನ್ನೂ ತೆಗೆದುಕೊಂಡು ಒಬ್ಬರಲ್ಲಿ ಇನ್ನೊಬ್ಬರ ಕೈಯನ್ನಿಟ್ಟು "ನಿರ್ಮಲ ಪ್ರೇಮಕ್ಕೆ ಕೋಮಿನ ಕಟ್ಟಿಲ್ಲ, ಜಾತಿಯ ಜಾಡ್ಯವಿಲ್ಲ; ನೀವಿಬ್ಬರೂ ಒಟ್ಟಾಗಿ ಬಾಳಿ ನಿಮ್ಮ ಬಾಳನ್ನು ಸೇವೆಯಲ್ಲಿ ಕಳೆಯಿರಿ; ನಿಷ್ಕಾಮ ಸೇವೆಯೇ ನಿಮ್ಮ ಜೀವನದ ಗುರಿಯಾಗಲಿ" ಎಂದರು ಮಾಸ್ತರು. ಅಷ್ಟರಲ್ಲಿ "ಇದೇನು ಮೇಷ್ಟರ ಕೈ ತಣ್ಣಗಿವೆ, ಚಳಿಯಿರಬೇಕು—ರಗ್ಗು ಹೊದ್ದಿಸು ಅಭಯ" ಎಂದಳು ರತ್ನಮಾಲೆ. ಹಣೆ ಕಾಲುಗಳನ್ನು ಮುಟ್ಟಿ ನೋಡಲು ಅವುಗಳೂ ತಣ್ಣಗಿದ್ದವು. ಗುಣಾವತಮ್ಮನವರು "ನಮೋ ಅರ್ಹಂತಾಣಾಂ; ನಮೋ ಸಿದ್ಧಾಣಾಂ" ಎಂದು ಪಂಚ ನಮಸ್ಕಾರಗಳನ್ನು ಹೇಳುತ್ತಿದ್ದರು. ರುಕ್ಮಿಣಮ್ಮನವರು ಕಿಟ್ಟನೆ ಕಿರಿಚಿದರು. ಅಷ್ಟುಹೊತ್ತಿಗಾಗಲೇ ಅನಂತ ಉಪಾಧ್ಯಾಯರ ನಿಷ್ಕಳಂಕ ಆತ್ಮ ಅಮರತ್ವವನ್ನು ಹೊಂದಿ ಅಂಬರದ ಕಡೆ ತೆರಳಿ ಬ್ರಹ್ಮನಲ್ಲಿ ಸೇರಿಹೋಗಿತ್ತು.